# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1164
ಸದಸ್ಯರ ಹೆಸರು : ಶ್ರೀ ಆರ್. ಪ್ರಸನ್ನಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ : 17-03-2020
ಉತ್ತರಿಸುವ ಸಚಿವರು : ಮಾನ್ಯ ಪೌರಾಡಳಿತ, ತೋಟಗಾರಿಕೆ ಮತ್ತು ರೇಷ್ಮೆ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಪುರಸಭೆ ಮುಖ್ಯಾಧಿಕಾರಿ ಹುದ್ದೆಗೆ ಕಂದಾಯಾಧಿಕಾರಿ, ಆರೋಗ್ಯ ನಿರೀಕ್ಷಕರು, ಸಂಘಟನಾಧಿಕಾರಿ, ಪ್ರಥಮ ದರ್ಜೆ ಸಹಾಯಕರು ಹಾಗೂ ಇತರೆ ಇಲಾಖೆಯ ಸಮಾನಾಂತರವಲ್ಲದ ಹುದ್ದೆಯ ನೌಕರರನ್ನು ಮುಖ್ಯಾಧಿಕಾರಿ ಹುದ್ದೆಗೆ ಖಾಯಂ ವರ್ಗಾವಣೆ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br>ಪೌರಾಡಳಿತ ಇಲಾಖೆಯಲ್ಲಿ ಮುಖ್ಯಾಧಿಕಾರಿ ವೃಂದದ ಅಧಿಕಾರಿಗಳ ಕೊರತೆ ಇರುವುದರಿಂದ ಪುರಸಭೆಗಳಲ್ಲಿನ ಮುಖ್ಯಾಧಿಕಾರಿ ಹುದ್ದೆಗೆ ಕಂದಾಯಾಧಿಕಾರಿ, ಕಛೇರಿ ವ್ಯವಸ್ಥಾಪಕರು, ಸಮುದಾಯ ಸಂಘಟನಾಧಿಕಾರಿ ಹಾಗೂ ಇತರ ನೌಕರರನ್ನು ಆಡಳಿತಾತ್ಮಕ ಹಿತದೃಷ್ಟಿಯಿಂದ ತಾತ್ಕಾಲಿಕವಾಗಿ ನೇಮಿಸಲಾಗುತ್ತಿದೆ. ಈ ವೃಂದಗಳಿಂದ ಒಟ್ಟು 52 ಅಧಿಕಾರಿ/ನೌಕರರು ಪುರಸಭೆಯ ಮುಖ್ಯಾಧಿಕಾರಿ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುತ್ತಾರೆ.<br>ಇತರೆ ಇಲಾಖೆಗಳ ಒಟ್ಟು 05 ಅಧಿಕಾರಿ/ನೌಕರರು ಪುರಸಭೆಯ ಮುಖ್ಯಾಧಿಕಾರಿ ಹುದ್ದೆಗಳಲ್ಲಿ ನಿಯೋಜನೆ ಮೇರೆಗೆ ಕರ್ತವ್ಯ ನಿರ್ವಹಿಸುತ್ತಿದ್ದಾರೆ. |
| ಆ. | ಈ ರೀತಿ ಪೌರಾಯುಕ್ತರುಗಳು, ಪುರಸಭೆಗಳಲ್ಲಿ ಖಾಯಂ ನೇಮಕಗೊಂಡು ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿದ್ದಾರೆಯೇ; ಅಥವಾ ಬೇರೆ ಇಲಾಖೆಗೆ ನಿಯೋಜನೆ ಮೇಲೆ ತೆರಳಿರುತ್ತಾರೆಯೇ; ಬೇರೆ ಇಲಾಖೆಗೆ ನಿಯೋಜನೆ ಮೇಲೆ ಹೋಗಲು ಕಾರಣಗಳೇನು; ಅಥವಾ ಈ ನೌಕರರು ಈ ಇಲಾಖೆಯಲ್ಲಿ ಅಗತ್ಯತೆ ಇಲ್ಲವೆ; ಈ ರೀತಿ ನಿಯೋಜನೆ ಮೇಲೆ ಹೋಗಿರುವವರು ಯಾರು? (ಪೌರಾಯುಕ್ತರಗಳ ಮಾಹಿತಿ ನೀಡುವುದು) | ಪುರಸಭೆಗಳಲ್ಲಿನ ಮುಖ್ಯಾಧಿಕಾರಿ ಹುದ್ದೆಗೆ ಖಾಯಂ ಆಗಿ ನೇಮಕಗೊಂಡಿರುವ ಅಧಿಕಾರಿಗಳು ನಿಯಮಾನುಸಾರ ಪದೋನ್ನತಿ ಹೊಂದಿದ್ದು, ಪೌರಾಯುಕ್ತರ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ.<br>ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ನಿಯಮ 16ರನ್ವಯ ಒಂದು ಇಲಾಖೆಯ ಅಧಿಕಾರಿಗಳು ಮತ್ತೊಂದು ಇಲಾಖೆಯ ಹುದ್ದೆಗಳಲ್ಲಿ ನಿಯೋಜನೆ ಮೇರೆಗೆ ಕರ್ತವ್ಯ ನಿರ್ವಹಿಸಲು ಅವಕಾಶ ಕಲ್ಪಿಸಲಾಗಿದೆ.<br>ಪೌರಾಯುಕ್ತರ ವೃಂದದ 03 ಅಧಿಕಾರಿಗಳು ಅನ್ಯ ಇಲಾಖೆಗಳಲ್ಲಿ ನಿಯೋಜನೆ ಮೇರೆಗೆ ಕರ್ತವ್ಯ ನಿರ್ವಹಿಸುತ್ತಿದ್ದು, ವಿವರಗಳು ಕೆಳಕಂಡಂತಿದೆ.<br>1 ಶ್ರೀಮತಿ ಅನುಪಮ – ಆಡಳಿತಾಧಿಕಾರಿ, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ, ಬೆಂಗಳೂರು<br>2 ಶ್ರೀಮತಿ ಸುಮತಿ – ಯೋಜನಾಧಿಕಾರಿ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ<br>3 ಶ್ರೀ ಹೆಚ್.ಇ.ಕೃಷ್ಣಮೂರ್ತಿ – ಜಂಟಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು. |

**ಸಂಖ್ಯೆ: ನಅಇ 10 ಎಲ್‌ಸಿಕ್ಯೂ 2020**

(ನಾರಾಯಣ ಗೌಡ)
ಪೌರಾಡಳಿತ, ತೋಟಗಾರಿಕೆ
ಮತ್ತು ರೇಷ್ಮೆ ಸಚಿವರು